# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೩ನೇ ವರ್ಷ ೧ನೇ ಸಂಚಿಕೆ ಕೊಪ್ಪ ೨೬-೮-೧೯೮೪ ಭಾನುವಾರ ಬೆಲೆ ೨೦ ಪೈಸೆ


## ಆಂಧ್ರ ಸರ್ಕಾರ ವಜಾಕ್ಕೆ ಕೊಪ್ಪ ವಿದ್ಯಾರ್ಥಿ ಪ್ರತಿಭಟನೆ

ಕೊಪ್ಪ: ಇಲ್ಲಿನ ಪ್ರಥಮ ದರ್ಜೆ ಕಾಲೇಜು ವಿದ್ಯಾರ್ಥಿಗಳು, ಆಂಧ್ರದಲ್ಲಿ ಎನ್.ಟಿ. ರಾಮರಾವ್ ಅವರ ಚುನಾಯಿತ ಸರ್ಕಾರವನ್ನು ವಜಾ ಮಾಡಿರುವುದರ ವಿರುದ್ಧ ಆ. ೨೨ರಂದು ಪ್ರತಿಭಟನಾ ಪ್ರದರ್ಶನ ನಡೆಸಿದ್ದಾಗಿ ವಿದ್ಯಾರ್ಥಿ ನಾಯಕರು ತಿಳಿಸಿದ್ದಾರೆ.

### ಪ್ರಜಾಪ್ರಭುತ್ವಕ್ಕಾಗಿ...

ಈ ದೇಶದ ಜನತೆಗೆ ಇನ್ನೂ ನಿಜವಾದ ಪ್ರಜಾಪ್ರಭುತ್ವ ಸಿಕ್ಕಿಲ್ಲ ನಿಜ. ಆದರೆ ಜನರಲ್ಲಿ ಪ್ರಕೃತಿದತ್ತವಾಗಿಯೆಂಬಂತೆ ಗಾಢವಾಗಿ ಇರುವ ಪ್ರಜಾತಂತ್ರದ ಆಕಾಂಕ್ಷೆಗೆ ಅವರಿಗೆ ಇನ್ನೂ ಸಿಕ್ಕಿರುವ ಪ್ರತಿಫಲ ಚುನಾಯಿತ ಸರ್ಕಾರಗಳು ಮಾತ್ರ. ಈ ಚುನಾಯಿತ ಸರ್ಕಾರಗಳನ್ನೂ ಸಹ, ಅನೀತಿಯ ಎಲ್ಲಾ ಎಲ್ಲೆಯನ್ನೂ ಮೀರಿ, ಉರುಳಿಸುತ್ತಿರುವ ಈ ದೇಶದ ಆಳುವ ವರ್ಗದ ವಿರುದ್ಧ ಸಿಡಿದು ನಿಂತಿರುವ ಜನಸ್ತೋಮದ ಉಗ್ರ ಪ್ರತಿಭಟನೆಯಲ್ಲಿ ನಿಮ್ಮ 'ಮುಂಜಾವು' ಸಂಪೂರ್ಣವಾಗಿ ಪಾಲ್ಗೊಳ್ಳುತ್ತದೆ. —ಸಂಪಾದಕ.

## ಭಾರತ ಬಂದ್:

# ಸರ್ವಾಧಿಕಾರದೆದುರು ಸೆಟೆದು ನಿಂತ ಜನತೆ

ರಾಷ್ಟ್ರೀಯ ವಿರೋಧ ಪಕ್ಷಗಳ 'ಭಾರತ ಬಂದ್' ಕರೆಯಂತೆ, ಆ. ೨೪ರಂದು ಶೃಂಗೇರಿ ಕ್ಷೇತ್ರದ ಮೂರೂ ತಾ|| ಗಳಲ್ಲಿ ಬಂದ್ ಆಚರಿಸಲಾಯಿತು. ಈ ಸಂದರ್ಭದಲ್ಲಿ ನಡೆದ ಬಹಿರಂಗ ಸಭೆಗಳಲ್ಲಿ ಜನತಾ, ಭಾಜಪ, ಕಮ್ಯುನಿಸ್ಟ್ ಮತ್ತಿತರ ವಿರೋಧ ಪಕ್ಷಗಳ ಹಾಗೂ ರೈತ ಸಂಘದ ನಾಯಕರುಗಳು ಈ ಬಂದ್‌ನ ಅಗತ್ಯ ಹಾಗೂ ಮಹತ್ವವನ್ನು ಕುರಿತು ಮಾತನಾಡಿದರು. ಚುನಾಯಿತ ಸರ್ಕಾರಗಳನ್ನು ಕಿತ್ತು ಹಾಕಿ ತನ್ನ ಕೈಗೊಂಬೆ ಸರ್ಕಾರಗಳನ್ನು ರಾಜ್ಯಗಳಲ್ಲಿ ಹೇರುತ್ತಿರುವ ಕೇಂದ್ರ ಸರ್ಕಾರದ ವಿರುದ್ಧ ಪ್ರತಿಭಟನೆಯ ಸಂಕೇತವಾಗಿ ನ.ರಾ.ಪುರದಲ್ಲಿ ಚಳುವಳಿಗಾರರು ಅಂಚೆ ಕಚೇರಿ ಎದುರು ಧರಣಿ ನಡೆಸಿ ಒಂದು ಗಂಟೆಗೂ ಹೆಚ್ಚು ಕಾಲ ಕೆಲಸ ಸ್ಥಗಿತಗೊಳಿಸಿದರು. ಬೆಳಿಗ್ಗೆ ಮುಂಚೆ ಮತ್ತು ಸಂಜೆ ಕೆಲವೇ ಬಸ್ಸುಗಳು ಓಡಾಡಿದ್ದು ಬಿಟ್ಟರೆ ಇಡೀ ದಿನ ಎಲ್ಲೂ ಬಸ್ಸುಗಳು ಓಡಾಡಲಿಲ್ಲ. ಬಂದ್ ಸಂಪೂರ್ಣ ಶಾಂತಿಯುತವಾಗಿದ್ದು ಅಭೂತಪೂರ್ವ ಯಶಸ್ಸು ಕಂಡಿತು. ಎಲ್ಲಾ ಪ್ರಜ್ಞಾವಂತರಿಂದಲೂ ಬೆಂಬಲ ಪಡೆಯಿತು. ಜನ ಅನ್ಯಾಯದ ವಿರುದ್ಧ ಧ್ವನಿ ಎತ್ತುವುದನ್ನು ಇನ್ನೂ ಈಗಷ್ಟೇ ಕಲಿಯುತ್ತಿರುವ ಇಲ್ಲಿನ ಮಟ್ಟಿಗೆ, ಎಲ್ಲಾ ಕಡೆಯೂ ಸಾಕಷ್ಟು ದೊಡ್ಡ ಸಂಖ್ಯೆಯಲ್ಲೇ ಜನ ಸೇರಿದ್ದರು

### ಐ. ಆರ್. ಡಿ. ಪಿ. ಸಾಲ ಕೊಡಿಸುವ ಆಸೆ ತೋರಿಸಿ

## ಬಡವರನ್ನು ವಂಚಿಸುವ ಜಾಲ : ತಾ|| ಜನತಾ ಕಾರ್ಯದರ್ಶಿಯೇ ಸೂತ್ರಧಾರ?

**ಕೊಪ್ಪ: ಬಡ ಹಳ್ಳಿಗರಿಗೆ ಐ.ಆರ್.ಡಿ.ಪಿ. ಸಾಲ ಕೊಡಿಸುತ್ತೇನೆಂದು ನಂಬಿಸಿ ತಾ|| ಜನತಾ ಪಕ್ಷದ ಕಾರ್ಯದರ್ಶಿಯೇ ಅವರನ್ನು ವಂಚಿಸುತ್ತಿದ್ದ ಪ್ರಕರಣವೊಂದು ಇಲ್ಲಿ ಬಯಲಾಗಿದೆ.**

ಶಾಸಕ ಗೋವಿಂದ ಗೌಡರಿಗೆ ಬೆಳವಿನಕೊಡಿಗೆ ಗ್ರಾಮದ ಮೂವರು ಆ. ೨೧ ರಂದು ಕೊಟ್ಟ ದೂರಿನಿಂದಾಗಿ ಬೆಳಕಿಗೆ ಬಂದಿರುವಂತೆ, ಸದರಿ ಕಾರ್ಯದರ್ಶಿ ಕುಟ್ಟಿ ಶೆಟ್ಟಿ, 'ಖ್ಯಾತ' ಗೋಪಾಲ ಭಂಡಾರಿ, ಮಹೇಶ್ ಮಿಲ್ಟ್ರಿ ಹೋಟೆಲಿನ ವಿಜಯೇಂದ್ರ ಮುಂತಾದವರ ಕೂಟ, ಬಡ ಹಳ್ಳಿಗರಿಗೆ ಸಾಲ ಕೊಡಿಸುವುದಾಗಿ ಹೇಳಿ ಅವರಿಂದ ಅರ್ಜಿ ಮತ್ತಿತರ ದಾಖಲೆಗಳನ್ನೂ, ಚಿಕ್ಕಮಗಳೂರಿಗೆ ಹೋಗಬೇಕೆಂದು ಹೇಳಿ ಹಣವನ್ನೂ ತೆಗೆದುಕೊಳ್ಳುವುದು, ಯಾವುದಾದರೊಂದು ವಸತಿಗೃಹದಲ್ಲಿ ಒಬ್ಬ ವ್ಯಕ್ತಿಯನ್ನು ರೂಮು ಮಾಡಿ ಕೂರಿಸಿ, ಬಡ ಜನರಿಗೆ "ಇವರು ಚಿಕ್ಕಮಗಳೂರಿನ ದೊಡ್ಡ ಅಧಿಕಾರಿಗಳು; ಅಸಿಸ್ಟೆಂಟ್ ಕಮಿಶನರು; ಸಾಲ ಮಂಜೂರು ಮಾಡುವುದೆಲ್ಲ ಇವರೇ" ಮುಂತಾಗಿ ನಂಬಿಸಿ, ಇನ್ನಷ್ಟು ಹಣ ಕಿತ್ತು ಅವರನ್ನು ಅಲೆದಾಡಿಸುವುದು—ಹೀಗೇ ಹಲವು ತಿಂಗಳಿಂದ ನಡೆಯುತ್ತಿತ್ತೆನ್ನಲಾಗಿದೆ.

#### ಶಾಸಕರಿಗೆ ಅಳುಕೇನು?

ಇಷ್ಟೆಲ್ಲ ಆಯಿತಲ್ಲ. ಶಾಸಕರಿಗೆ ದೂರು ಬಂದು ೪ ದಿನ ಕಳೆದರೂ, ಈ ವ್ಯಕ್ತಿಗಳೆಲ್ಲ ಪೇಟೆಯಲ್ಲೇ ಓಡಾಡಿಕೊಂಡಿದ್ದರೂ, ತಮ್ಮ ಪಕ್ಷದ ಕಾರ್ಯದರ್ಶಿಯನ್ನೇ ಕರೆಸಿ ಏನೆಂದು ಕೇಳಿಲ್ಲ ಏಕೆ? ಒಂದು ಜಾಲವೇ ಇರುವುದು ತಿಳಿದು ಬಂದರೂ ಅದನ್ನು ಭೇದಿಸಲು ಮನಸ್ಸು ಮಾಡುವುದಿಲ್ಲ ಏಕೆ? ಪೋಲೀಸಿಗೆ ವಂಚನೆಯ ದೂರು ಕೊಟ್ಟು ಪ್ರಕರಣವನ್ನು ವಿಚಾರಣೆಗೆ ಒಳಪಡಿಸಿ, ಮೊನ್ನೆ ಪಂಡಿತ್ ನಿವಾಸದಲ್ಲಿ ಚಿದಂಬರ ಗೌಡ ಎಂಬ ಹೆಸರಿನಲ್ಲಿ ರೂಮು ಮಾಡಿಕೊಂಡಿದ್ದ ವ್ಯಕ್ತಿ ಯಾರು, ಈ ಜಾಲದ ಹರಹು ಏನು? ಎಂಬುದನ್ನು ಪತ್ತೆ ಹಚ್ಚಲು ಯತ್ನಿಸುವುದಿಲ್ಲ, ಏಕೆ?

ಹೀಗೆ. ತನ್ನ ಮೂಗಿನಡಿಯೇ ನಡೆಯುತ್ತಿರುವುದನ್ನು ಸಕಾಲದಲ್ಲಿ ತಾವೇ ವಿಚಾರಣೆ ನಡೆಸದೆ ಜಿಲ್ಲಾಧಿಕಾರಿಗಳಿಂದ ತನಿಖೆ ಮಾಡಿಸಿದರೂ ಏನು ಫಲ ಸಿಕ್ಕೀತು? ಶಾಸಕರು ಹೀಗೇಕೆ ಅಳುಕುತ್ತಾರೆ?

ಹೀಗೆ ಎಲ್ಲರನ್ನೂ 'ಸುಧಾರಿಸಿಕೊಂಡು ಹೋಗುವ' ಪ್ರವೃತ್ತಿ ಎಷ್ಟು ದಿನ ನಡೆದೀತು? ತಪ್ಪು ಕಂಡಲ್ಲೇ ಬಯಲಿಗೆಳೆದು, ಯಾರನ್ನು ಎಷ್ಟಕ್ಕೆ ಕತ್ತರಿಸಿಡಬೇಕೋ ಅಷ್ಟಕ್ಕೆ ಇಡದೆ, ಬಂದವರ ಹತ್ತಿರವೆಲ್ಲ, "೩೮ ವರ್ಷದಿಂದಲೂ ನೋಡಿ ನಂ ದೇಶ.." ಮುಂತಾಗಿ ಕೋಪ ಪ್ರಕಟಿಸುತ್ತ ಕೂತರೆ, ಈ ನಿಷ್ಕ್ರಿಯತೆಗೆ ಬಲಿಯಾಗುವವರು ಬಡಬಗ್ಗರಲ್ಲವೆ?

ಗೋವಿಂದ ಗೌಡರು ತಮ್ಮ ಈ ಪ್ರವೃತ್ತಿಯನ್ನು ಇನ್ನಾದರೂ ಬದಲಾಯಿಸಿಕೊಳ್ಳದಿದ್ದರೆ, ಅವರ ಸುತ್ತ ಈಗಾಗಲೇ ಜಮಾಯಿಸಿರುವ ವಂಚಕರ, ಸಮಯ ಸಾಧಕರ ಹಿಂಡು ಮುಂದೆ ಅವರ ಕೈಯಲ್ಲೇ ತಮ್ಮ ಈ ಕೆಲಸಗಳನ್ನೆಲ್ಲ ಮಾಡಿಸುತ್ತದೆ, ಜನತೆಗೆ ದ್ರೋಹ ಬಗೆಸುತ್ತದೆ.

### ಡಿಎಫ್‌ಒ ಕಚೇರಿಗಾಗಿ ನಿರ್ಮಾಣವಾಗುತ್ತಿದ್ದ ಕಟ್ಟಡ ಕುಸಿತ

ಕೊಪ್ಪ: ಇಲ್ಲಿನ ತೀರ್ಥಳ್ಳಿ ರಸ್ತೆಯಲ್ಲಿ ಡಿ. ಎಫ್. ಒ. ಕಚೇರಿಗಾಗಿ ಲೋಕೋಪಯೋಗಿ ಇಲಾಖೆ ಕಟ್ಟಿಸುತ್ತಿದ್ದ ಎರಡಂತಸ್ತಿನ ದೊಡ್ಡ ಕಟ್ಟಡದ ಒಂದು ಇಡೀ ಪಾರ್ಶ್ವ ಆ. ೧೯ ರಂದು ಬೆಳಗಿನ ಜಾವ ನೆಲಸಮವಾಯಿತು. ಇನ್ನೊಂದು ಪಾರ್ಶ್ವದ ಕೋಣೆಯಲ್ಲಿದ್ದ ಕಾವಲುಗಾರರೂ ಸೇರಿದಂತೆ ಯಾರಿಗೂ ಅಪಾಯವಾಗಲಿಲ್ಲ.

ಸುಮಾರು ೪೦ ಸಾವಿರ ರೂ. ನಷ್ಟವಾಗಿದೆ. ಕಂಟ್ರಾಕ್ಟರ್ ಅಣ್ಣುಕಳಿ ಶ್ರೀನಿವಾಸ ನಾಯ್ಕರೇ ಕಟ್ಟಡ ಪುನರ್ನಿರ್ಮಿಸಿಕೊಡಲು ಒಪ್ಪಿದ್ದಾರೆನ್ನಲಾಗಿದೆ

ಈ ಪಾರ್ಶ್ವದ ಕೆಳ ಕೆಂತಸ್ತಿನ ಮುಖ್ಯ ಗೋಡೆಗೆ ಅರೆಬೆಂದ ಇಟ್ಟಿಗೆಗಳನ್ನು ಬಳಸಿದ್ದು ಹಾಗೂ ಅಮ್ಮಸಂದ್ರದ್ದೆನ್ನಲಾದ ಕಳಪೆ ಗುಣಮಟ್ಟದ ಸಿಮೆಂಟ್ – ಇವು ಕಟ್ಟಡ ಕುಸಿಯಲು ಕಾರಣವೆನ್ನಲಾಗಿದೆ.

### ವೈಶಿಷ್ಟ್ಯದ ಸ್ವಾತಂತ್ರ್ಯೋತ್ಸವ

ಕಳಸ: ಇಲ್ಲಿನ ಅಫಿಶಿಯಲ್ ಇಕ್ರಿಯೇಶನ್ ಸೆಂಟರ್‌ನ ಆಶ್ರಯದಲ್ಲಿ ವೈಶಿಷ್ಟ್ಯಪೂರ್ಣವಾಗಿ ನಡೆದ ಸ್ವಾತಂತ್ರ್ಯೋತ್ಸವದ ಅಂಗವಾಗಿ ವಿವಿಧ ಆಟೋಟ ಸ್ಪರ್ಧೆಗಳು ಮತ್ತು ಸಾರ್ವಜನಿಕರನ್ನೊಳಗೊಂಡು ಸೈಕಲ್ ಸ್ಪರ್ಧೆಗಳು ನಡೆದವು.

'ದಂಪತಿಗಳ ಸಂಗಮ' ಹೆಸರಿನ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಕ್ರಿಶ್ಚಿಯನ್, ಮುಸ್ಲಿಂ ಮತ್ತು ಹಿಂದೂ ವಿವಾಹ ಪದ್ಧತಿಗಳ ಬಗ್ಗೆ ಭಾಷಣಗಳು, ನಂತರ ಸಂಗೀತ ಕಾರ್ಯಕ್ರಮ ನಡೆದವು.

ಸ್ಥಳೀಯ ಶಾಲಾ-ಕಾಲೇಜಿನ ವಿದ್ಯಾರ್ಥಿವೃಂದ ಪ್ರಭಾತ್ ಫೇರಿಯೊಂದಿಗೆ ಸಂಭ್ರಮದಿಂದ ಸ್ವಾತಂತ್ರ್ಯೋತ್ಸವ ಆಚರಿಸಿದರು.

#### ಬಾಳೆಗಡಿ ಯುವಕ ಸಂಘದಲ್ಲಿ

ಕೊಪ್ಪ ಬಾಳೆಗಡಿಯ ಸರ್ವೋದಯ ಯುವಕ ಸಂಘದಲ್ಲಿ ಕಾರ್ಯದರ್ಶಿ ಕೆ. ಎಸ್. ಪ್ರಕಾಶ್ ಧ್ವಜಾರೋಹಣ ಮಾಡಿದರು. ಬಿ.ನಾ.ವಾಸುದೇವ ರಾವ್ ಭಾಷಣ ಮಾಡಿದರು. ಹೆಚ್.ವಿ.ವಿಶ್ವನಾಥ್ ಸ್ವಾಗತಿಸಿ, ಬಿ.ಪಿ.ವಜ್ರನಾಥಯ್ಯ ವಂದಿಸಿದರು.

ಅನಿವಾರ್ಯ ಕಾರಣಗಳಿಂದ ನಮ್ಮ ೧೯-೮-೮೪ ರ ಸಂಚಿಕೆ ಸಹ ಪ್ರಕಟಿಸಲಾಗಲಿಲ್ಲ, ಕ್ಷಮಿಸಿ. —ಸಂ.

ಮಾನ್ಯ ಸಹಕಾರಿ ಬಂಧುಗಳಲ್ಲಿ ಸವಿನಯ ವಿನಂತಿ.

ಸ್ವಾಮಿ, ದಿನಾಂಕ 23–8–84ರಂದು ನಡೆದ ತಾ.ವ್ಯ.ಮಾ.ಸ.ಸಂ., ಕೊಪ್ಪ. ಇದರ ಸರ್ವ ಸದಸ್ಯರಲ್ಲಿ "ಬಿ" ತರಗತಿಗೆ ನಡೆದ ಕಾರ್ಯಕಾರಿ ಮಂಡಲಿಯ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ನನಗೆ ಅಭಿಮಾನವಿಟ್ಟು ಮತ ನೀಡಿದ ತಮ್ಮೆಲ್ಲರಿಗೂ ನಾನು ಜಯಶಾಲಿಯಾಗದಿದ್ದಾಗ್ಯೂ ಸಹ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುವುದು ನನ್ನ ಕರ್ತವ್ಯವಾಗಿರುತ್ತೆ. ತಮ್ಮಿಂದ ದೊರೆತ ಸಕಲ ವಿಧದ ಸಹಕಾರವನ್ನು ನಾನು ಅತ್ಯಂತ ಚಿರಋಣಿ.

ಇಂತು

ವೆಂಕಟಕೃಷ್ಣಪ್ಪ, ನಾಗಮಕ್ಕಿ.

## ಓದುಗರ ಪತ್ರಗಳು

# ಮಂಗನ ಕಾಯಿಲೆ ಮಾಹಿತಿಗೆ ಧನ್ಯವಾದ

ಮಾನ್ಯರೆ,

ನಿಮ್ಮ ಪತ್ರಿಕೆಯ ೧೨-೮-೮೮ ರ ಸಂಚಿಕೆಯಲ್ಲಿ ಮಂಗನ ಕಾಯಿಲೆಯ ಬಗ್ಗೆ ಪ್ರಕಟಿಸಿದ್ದಕ್ಕೆ ತುಂಬಾ ಧನ್ಯವಾದಗಳು. ಇದರಿಂದ ಆ ಭಾಗದ ಜನಗಳಿಗೆ ಸಹಾಯವಾಗುವಂತೆಯೇ ನಮ್ಮ ಆರೋಗ್ಯ ಇಲಾಖೆಗೂ ಉಪಕಾರವಾಗುತ್ತದೆ.

ಮಂಗನ ಕಾಯಿಲೆ ಬರದಂತೆ ತಡೆಗಟ್ಟಬಲ್ಲ ಲಸಿಕೆ ತಯಾರಿಸುವ ಘಟಕವನ್ನು ಶಿವಮೊಗ್ಗದಲ್ಲಿ ತೆರೆಯಲು ಏರ್ಪಾಡುಗಳು ನಡೆಯುತ್ತಿವೆ. ಈ ಮಧ್ಯೆ, ಜ್ವರ ಪೀಡಿತ ರೋಗಿಯ 'ರಕ್ತಲೇಪನ'ವನ್ನು ತಜ್ಞ ಪರೀಕ್ಷೆಗಾಗಿ ಕಳಿಸಿಕೊಡುವಂತೆ ಎಲ್ಲಾ ವೈದ್ಯಾಧಿಕಾರಿಗಳಿಗೂ ಆದೇಶ ಕೊಡಲಾಗಿದೆ.

ನೀವು ಪ್ರಕಟಿಸಿರುವಂತೆ, ಜನ ಯಾವುದೇ ಸಂದರ್ಭದಲ್ಲೂ ಮುಂಜಾಗ್ರತೆ ಕ್ರಮಗಳನ್ನು ಅನುಸರಿಸುವುದು ಸೂಕ್ತ.

—ಡಾ|| ಸೂ. ಕೃ. ರಾಮಚಂದ್ರ,
ಆರೋಗ್ಯ ವೈದ್ಯಾಧಿಕಾರಿ,
ಕ್ಯಾಸನೂರು ಕಾಡಿನ ಕಾಯಿಲೆ, ಸಾಗರ.

## "ಈ ಕಿರಿಕಿರಿ ನಿಲ್ಲಲಿ"

ಮಾನ್ಯರೆ,

ಶೃಂಗೇರಿಗೆ ಸಮೀಪದ ಆನೆಗುಂದದಲ್ಲಿ ಈ ವರ್ಷ ಹೊಸದಾಗಿ ನಿರ್ಮಾಣವಾಗಿರುವ ಗಣಪತಿ ದೇವಸ್ಥಾನದಲ್ಲಿ ಪ್ರತಿ ದಿನ ಸಂಜೆ ಸುಮಾರು ೬ ಗಂಟೆಯಿಂದ ಒಂದು ಗಂಟೆಗೂ ಹೆಚ್ಚು ಹೊತ್ತು ಐದಾರು ಹುಡುಗಿಯರು ದೇವಸ್ಥಾನಕ್ಕೆಂದು ಬಂದು, ಕೆಳಗಡೆ ರಸ್ತೆಯಲ್ಲಿ ಹೋಗು–ಬರುವ ಜನರನ್ನು ನೋಡಿ ಹಾಸ್ಯ ಮಾಡುತ್ತಾ, ನಗಾಡುತ್ತಾ ಕೂತಿರುತ್ತಾರೆ. ಇದರಿಂದ ಇಲ್ಲಿ ಓಡಾಡುವ ನಮಗೆ ಕಿರಿಕಿರಿಯಾಗುತ್ತಿದೆ. ಇನ್ನಾದರೂ ಇದನ್ನು ನಿಲ್ಲಿಸಬೇಕಾಗಿ ದಾರಿಹೋಕರ ಪರವಾಗಿ ಕೇಳಿಕೊಳ್ಳುತ್ತೇನೆ.

—ಎಸ್. ವೆಂಕಟೇಶ್,
ಕಡೆಮನೆ, ಶೃಂಗೇರಿ ತಾ||

# ಸಮಯೋಚಿತ

ಮಾನ್ಯರೆ,

ನಿಮ್ಮ ೧೨-೮-೮೮ರ ಸಂಚಿಕೆಯ ಸಂಪಾದಕೀಯ "ಪತ್ರಿಕಾ ವರದಿಗಳಿಗೆ ಸ್ಪಷ್ಟೀಕರಣ" ಸಮರ್ಪಕವಾಗಿದೆ. ಜನರಿಗೆ ಈ ವಿಷಯದಲ್ಲಿ ತಿಳುವಳಿಕೆ ನೀಡಿರುವುದು ಸಮಯೋಚಿತವಾಗಿದೆ. ಜನ ಇದನ್ನು ತಿಳಿದುಕೊಳ್ಳಲೆಂದು ಆಶಿಸುತ್ತೇನೆ.

ಪತ್ರಿಕೆಗಳು ಸಮಾಜದ ಸುಧಾರಣೆಯಲ್ಲಿ ಒಂದು ಪ್ರಮುಖ ಪಾತ್ರ ನಿರ್ವಹಿಸುತ್ತವೆ. 'ಕುಂಬಳ ಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿ ನೋಡಿಕೊಳ್ಳುವ' ಪ್ರವೃತ್ತಿ ನಮ್ಮ ಜನ ಬಿಡಬೇಕು. ಪತ್ರಿಕೆಗಳಲ್ಲಿ ಬರುವ ವರದಿಗಳ ಬಗ್ಗೆ ತಲೆ ಕೆಡಿಸಿಕೊಂಡು, ಸ್ಪಷ್ಟೀಕರಣವನ್ನೂ ನೀಡದೇ ವರದಿಗಾರರಿಗೆ, ಸಂಪಾದಕರಿಗೆ ಹಲ್ಲೆಯ ಬೆದರಿಕೆ ಹಾಕುತ್ತ ಬಾಲ ಸುಟ್ಟ ಬೆಕ್ಕಿನಂತೆ ಕುಣಿಯುವುದನ್ನು ಬಿಡಬೇಕು. ಪತ್ರಿಕೆಗಳಲ್ಲಿ ಉದ್ದೇಶಪೂರ್ವಕವಾಗಿ ಯಾರ ಬಗ್ಗೆಯೂ ಬರೆಯುವುದಿಲ್ಲ. ಆಕಸ್ಮಾತ್ತಾಗಿ ತಪ್ಪು ಸುದ್ದಿ ಪ್ರಕಟಗೊಂಡರೆ ಅದರ ನಿಜ ಸಂಗತಿ ಸಂಪಾದಕರಿಗೆ ತಿಳಿದಾಗ ಅವರೇ ವಿಷಾದ ವ್ಯಕ್ತಪಡಿಸಬಹುದು. ಸ್ಪಷ್ಟೀಕರಣ ನೀಡಲು ಇಂತಹ ವಿಪುಲ ಅವಕಾಶಗಳಿರುವಾಗ ಜನ ತಿಳಿದು ನಡೆದುಕೊಳ್ಳುವುದು ಒಳಿತು.

—ಕಲಬಿ ಶ್ರೀನಿವಾಸ್,
ಪತ್ರಿಕಾ ಪ್ರತಿನಿಧಿ, ಆಗಳಗಂಡಿ.

## 'ಟಿ.ವಿ.'ಯ ಠೀವಿ :
# ಕಡೆಗಣಿಸಲ್ಪಟ್ಟ ಜಿಲ್ಲೆ

ಮಾನ್ಯರೆ,

ಮಂಗಳೂರು, ಭದ್ರಾವತಿ ಮತ್ತಿತರ ಕಡೆ ಟಿ.ವಿ. ರಿಲೇ ಕೇಂದ್ರ ಸ್ಥಾಪನೆಯಾಗಿ 'ಠೀವಿ' ಮೆರೆಯುತ್ತಿರುವುದು ಓದಿದ ಸಂಗತಿ. ಈ ವಿಷಯದಲ್ಲಿ ನಮ್ಮ ಚಿಕ್ಕಮಗಳೂರು ಜಿಲ್ಲೆಯನ್ನು ಕಡೆಗಣಿಸಿರುವುದು ಖೇದಕರ. (ಈ ಜಿಲ್ಲೆಯ ತರೀಕೆರೆಯಲ್ಲಿ ಭದ್ರಾವತಿ ಕೇಂದ್ರದಿಂದ ಟಿ. ವಿ. ಚಿತ್ರ ಮೂಡಿ ಬರುವುದಂತೆ?)

ಹಳ್ಳಿಗಳು ಹೆಚ್ಚಾಗಿರುವ, ವ್ಯವಸಾಯ ಪ್ರಧಾನವಾದ ಈ ಮಲೆನಾಡಿನ ಜನತೆಗೂ ಟಿ.ವಿ. ಬೇಕು. ಆದ್ದರಿಂದ, ಜಗದ್ವಿಖ್ಯಾತ ಪ್ರವಾಸಿ ಕೇಂದ್ರವಾದ ಶೃಂಗೇರಿಯಲ್ಲಿ ಇಂಥದೇ ಒಂದು ಟಿ. ವಿ. ರಿಲೇ ಕೇಂದ್ರವನ್ನು ಸ್ಥಾಪಿಸಿದರೆ ಸುತ್ತ ಮುತ್ತಲ ಹಲವಾರು ಊರುಗಳಿಗೆ ಉಪಯೋಗವಾಗುವುದು. ನಮ್ಮ ಜನತೆಯ ಈ ಬೇಡಿಕೆಯ ಈಡೇರಿಕೆಗೆ ನಮ್ಮ ಶಾಸಕರು, ಎಂ.ಪಿ.ಗಳು ಎಷ್ಟರ ಮಟ್ಟಿಗೆ ಶ್ರಮಿಸುತ್ತಾರೋ ಕಾದು ನೋಡಬೇಕು.

—ರಮೇಶ್ ಎಸ್ವಿ, ಬೇಗಾರು.

## ಗಿರಿಜನರಿಂದವಸೂಲಿಮಾಡಿದ್ದ
# ಹಣ ವಾಪಸ್ !

ಬಿಲಗದ್ದೆ: ಇಲ್ಲಿಗೆ ಸಮೀಪದ ತಲಗೋಡು ಮಕ್ಕಿ ವಾಸಿಗಳಾದ ೬ ಮಂದಿ ಗಿರಿಜನರಿಂದ, ಜನತಾ ಮನೆಯ ಬಿಲ್ ಮಾಡಿಸಿಕೊಡುವುದಕ್ಕೆಂದು ತಲಾ ೪೦ ರೂ. ನಂತೆ ಕಬಳಿಸಿದ್ದನೆನ್ನಲಾದ ಬಿ. ಕೆ. ಶ್ರೀನಿವಾಸ ಎಂಬ ವ್ಯಕ್ತಿ ಊರವರ ಪ್ರಯತ್ನ ಹಾಗೂ ಅಧಿಕಾರಿಗಳ ಮಧ್ಯಸ್ಥಿಕೆಯಿಂದಾಗಿ ಆ ಹಣವನ್ನು ಅವರವರಿಗೇ ಹಿಂದಿರುಗಿಸಿದ್ದಾಗಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಚೇರಿಯಿಂದ ದೃಢಪಟ್ಟ ಸುದ್ದಿಯಿಂದ ತಿಳಿದು ಬಂದಿದೆ. ಈ ಬಗ್ಗೆ ಕೊಪ್ಪದ ಪೋಲೀಸರಿಗೆ ಕೂಡ ದೂರು ಕೊಡಲಾಗಿದ್ದು, ಸಬ್ ಇನ್ಸ್‌ಪೆಕ್ಟರ್ ಶಶಿ ಕುಮಾರ್ ಹಳ್ಳಿಗೆ ಭೇಟಿ ನೀಡಿದ್ದಾಗ ವಿಚಾರಣೆ ನಡೆಸಿದ್ದರೆನ್ನಲಾಗಿದೆ.

ಈ 'ವ್ಯವಹಾರ' ಕುರಿತು ೧೫-೭-೮೮ರ 'ಮುಂಜಾವು' ಸುದ್ದಿ ಪ್ರಕಟಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

# ಕೊಪ್ಪ ರೋಟರಿ ಕ್ಲಬ್ ಚಟುವಟಿಕೆಗಳು

ಕೊಪ್ಪ: ಇಲ್ಲಿ ಕೆಲ ಸಮಯದ ಹಿಂದೆ ಆರಂಭವಾದ ರೋಟರಿ ಕ್ಲಬ್ ಶಾಖೆಗೆ ಜೂನ್ ೨೯ ರಂದು ಆಗಿನ ರೋಟರಿ ಜಿಲ್ಲಾ ಗೌರ್ನರ್ ಕ|| ರೊ|| ಬಿ. ಎಂ. ಚಂಗಪ್ಪ ಚಾರ್ಟರ್ (ಅಂತರ ರಾಷ್ಟ್ರೀಯ ಮಾನ್ಯತೆಯ ಸಂಕೇತ) ನೀಡಿದರು. ಕ್ಲಬ್ಬಿಗೆ ವಿಜಯ ಅಜಿಲ ಅಧ್ಯಕ್ಷರು, ಕೆ. ಎಸ್. ಶಾಂತಾರಾಂ ಕಾರ್ಯದರ್ಶಿ ಮತ್ತು ಬಿ.ಎಸ್.ಶ್ರೀನಿವಾಸ್ ಖಜಾಂಚಿ.

ಆ. ೬ರಂದು ರೋಟರಿ ಜಿಲ್ಲಾ ಗೌರ್ನರ್ ಡಾ|| ರೊ|| ಶಾಂತಾರಾಂ ಅಧಿಕೃತ ಭೇಟಿ ಕೊಟ್ಟು ಅಂದಿನ ಸಮಾರಂಭಗಳಲ್ಲಿ ಭಾಗವಹಿಸಿದರಲ್ಲದೆ, ಸದಸ್ಯರೊಡನೆ ಸಮಾಲೋಚನೆ ನಡೆಸಿದರು. ಅಂದು ಬೆಳಿಗ್ಗೆ ಕುದುರೆಗುಂಡಿ ಶಾಲೆಯಲ್ಲಿ ನಡೆದ ಸಮಾರಂಭದಲ್ಲಿ ಶಾಲೆಗೆ ಒಂದು ಗೋಡೆ ಗಡಿಯಾರ ಕೊಡಲಾಯಿತು.

ಮಧ್ಯಾಹ್ನ ಕೊಪ್ಪಪುರಭವನದಲ್ಲಿ ನಡೆದ ಸಮಾರಂಭದಲ್ಲಿ ಪೇಟೆಯ ಎಲ್ಲ ಶಾಲೆಗಳ ೫೦ ಬಡ ವಿದ್ಯಾರ್ಥಿಗಳಿಗೆ ಸ್ಲೇಟು,ಪುಸ್ತಕ ವಗೈರೆ ಹಂಚಲಾಯಿತು. ಕೊಪ್ಪದಲ್ಲಿ ಕಲಿತು ಎಸ್ಸೆಸ್ಸೆಲ್ಸಿ ಮತ್ತು ಪಿಯುಸಿಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ಇಬ್ಬರು ವಿದ್ಯಾರ್ಥಿಗಳಿಗೆ ತಲಾ ೧೦೦ ರೂ. ಪ್ರೋತ್ಸಾಹ ಬಹುಮಾನ ನೀಡಲಾಯ್ತು. ಡಾ|| ಶಾಂತಾರಾಂ, ರೊ|| ಎನ್. ಪಿ. ಗೋವಿಂದೇಗೌಡ ಮಾತನಾಡಿದರು.

(ವರದಿ: ಕೆ. ಎಸ್. ಶಾಂತಾರಾಂ)

## ಆಂಧ್ರ ಸರ್ಕಾರ ವಜಾ ವಿರುದ್ಧ ನ. ರಾ. ಪುರದಲ್ಲಿ ಪ್ರತಿಭಟನೆ

ನ.ರಾ.ಪುರ: ಆಂಧ್ರ ಪ್ರದೇಶದ ರಾಜ್ಯಪಾಲರು ಎನ್. ಟಿ. ರಾಮ ರಾವ್ ಸರ್ಕಾರವನ್ನು ವಜಾ ಮಾಡಿದ್ದರ ವಿರುದ್ಧ ಇಲ್ಲಿನ ಜನತಾ ಮತ್ತು ಬಿಜೆಪಿ ಘಟಕಗಳ ನೇತೃತ್ವದಲ್ಲಿ ಆ. ೧೮ ರಂದು ಬೃಹತ್ ಪ್ರತಿಭಟನಾ ಪ್ರದರ್ಶನ ಮತ್ತು ಸಭೆ ನಡೆದವು. ದಯಾನಂದ ಕಲ್ಲೆ, ಬಿ. ಎಸ್. ಸುಧಾಕರ ರಾವ್, ಮೀಗ ಚಂದ್ರಶೇಖರ್ ಭಾಷಣ ಮಾಡಿದರು.

### ಹಸುಗಳ ವಿತರಣೆ

ಇಲ್ಲಿನ ಮೈಸೂರು ಬ್ಯಾಂಕ್ ಹರಿಜನ-ಗಿರಿಜನರಿಗೆ ನೀಡಿದ ೮ ಹಸುಗಳನ್ನು ಶಾಸಕ ಗೋವಿಂದ ಗೌಡರು ಈಚೆಗೆ ವಿತರಣೆ ಮಾಡಿದರು. ಪುರಸಭಾಧ್ಯಕ್ಷ ಮೀಗಚಂದ್ರಶೇಖರ್ ಮತ್ತು ಬ್ಯಾಂಕಿನ ಡಿವಿಜನಲ್ ಮ್ಯಾನೇಜರ್ ಮುಖ್ಯ ಅತಿಥಿಗಳಾಗಿದ್ದರು.

# ಸ್ವಾತಂತ್ರ್ಯ ದಿನಾಚರಣೆ

### ಬಿಲಗದ್ದೆ

ಇಲ್ಲಿನ ಯುವಕ ರೈತ ಸಂಘ, ಮಹಿಳಾ ಸಮಾಜ ಮತ್ತು ಶಾಲಾಭಿವೃದ್ಧಿ ಸಮಿತಿಗಳ ಆಶ್ರಯದಲ್ಲಿ ನಡೆದ ಸ್ವಾತಂತ್ರ್ಯ ದಿನಾಚರಣೆಯಲ್ಲಿ ಕಾವಳಿ ಲಕ್ಷ್ಮೀನಾರಾಯಣಪ್ಪ ಧ್ವಜಾರೋಹಣ ಮಾಡಿದರು. ಟಿ. ಎಸ್. ಗಿರಿಯಪ್ಪ ನಾಯ್ಕ ಅಧ್ಯಕ್ಷತೆ ವಹಿಸಿದ್ದರು.

### ಹಾಲ್ಮತ್ತೂರು

ಇಲ್ಲಿನ ಶಾಲಾ ಆವರಣದಲ್ಲಿ ನಡೆದ ಸ್ವಾತಂತ್ರ್ಯೋತ್ಸವದಲ್ಲಿ ಹೆಚ್.ಡಿ.ಶ್ರೀನಿವಾಸ್ ಧ್ವಜಾರೋಹಣ ಮಾಡಿದರು. ಹೆಚ್. ವೈ. ಸೀತಾರಾಮ ಭಟ್ಟ ಅಧ್ಯಕ್ಷತೆ ವಹಿಸಿದ್ದರು. ಶ್ರೀನಿವಾಸ್, ಗಂಗಾಧರಯ್ಯ, ಹೆಚ್. ವಿ. ನಾಗರಾಜ್, ವೆಂಕಟೇಶಯ್ಯ ಮಾತನಾಡಿದರು. ಇಲ್ಲಿನ ಹಾಗೂ ಹುಲುಕೋಡಿನ ಶಾಲೆಗಳ ಮಕ್ಕಳಿಂದ ಮನರಂಜನೆ ಕಾರ್ಯಕ್ರಮ ನಡೆಯಿತು.

### ಅದ್ದಡ

ಇಲ್ಲಿನ ಹಿ. ಪ್ರಾ. ಶಾಲೆಯಲ್ಲಿ ಎಸ್.ಪಿ. ರಾಮಮೋಹನ್‌ರವರ ಅಧ್ಯಕ್ಷತೆಯಲ್ಲಿ ನಡೆದ ಸ್ವಾತಂತ್ರ್ಯೋತ್ಸವದಲ್ಲಿ ಎನ್. ಗೋಪಾಲ ರಾವ್ ರಾಷ್ಟ್ರಧ್ವಜ ಅರಳಿಸಿದರು. ಶಾಲಾ ಮಕ್ಕಳಿಂದ ಮೊದಲಿಗೆ ಮೆರವಣಿಗೆ ಮತ್ತು ನಂತರ ಮನರಂಜನೆ ಕಾರ್ಯಕ್ರಮ ನಡೆದವು. ಎಸ್.ಪಿ.ಚಂದ್ರಶೇಖರ್ ಮಾತನಾಡಿದರು. ಕೊಪ್ಪ ಪಂಚಾಯ್ತಿಯಿಂದ ಕೊಡಲಾದ ಶಾಲಾ ಸಮವಸ್ತ್ರಗಳನ್ನು ಹರಿಜನ-ಗಿರಿಜನ ಮಕ್ಕಳಿಗೆ ಹಂಚಲಾಯಿತು.

### ಕೊಪ್ಪ ಲಯನ್ಸ್ ಕ್ಲಬ್

ಲಯನ್ಸ್‌ಕ್ಲಬ್ ಅಧ್ಯಕ್ಷ ಡಾ|| ಮೋಹನ್ ಬಿ.ಎಸ್.ಶೆಟ್ಟಿಯವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ತಹಸೀಲ್ದಾರ್ ಎಸ್. ಶರೀಗೌಡ ಮುಖ್ಯ ಅತಿಥಿಯಾಗಿದ್ದರು. ಕ್ಲಬ್‌ನ 'ವಿದ್ಯಾರ್ಥಿ ಪ್ರತಿಭಾ ಪ್ರೋತ್ಸಾಹ ಯೋಜನೆ'ಯಲ್ಲಿ ೬ ಜನ ವಿದ್ಯಾರ್ಥಿಗಳಿಗೆ ಸಹಾಯಧನ ನೀಡಲಾಯಿತು ಹಾಗೂ ಇಬ್ಬರು ರೋಗಿಗಳಿಗೆ ಔಷಧೋಪಚಾರಕ್ಕೆ ಸಹಾಯ ನೀಡಲಾಯಿತು.

### ದಯಂಬಳ್ಳಿ

ಇಲ್ಲಿನ ಶಾಲಾ ಆವರಣದಲ್ಲಿ ಡಿ. ಎನ್. ಶ್ರೀನಿವಾಸ್ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಹೆಚ್. ಎಸ್. ಗುಂಡಪ್ಪ ಧ್ವಜಾರೋಹಣ ಮಾಡಿದರು. ಕೆ. ಟಿ. ಕಳಸಪ್ಪಗೌಡ ಮುಖ್ಯ ಅತಿಥಿಯಾಗಿದ್ದರು.

## ನ. ರಾ. ಪುರದ ಬಳಿ
# ತೇಗದ ಕಳ್ಳರ ಬಂಧನ

ನ.ರಾ.ಪುರ ಇಲ್ಲಿಗೆ ೧೫ ಕಿ.ಮಿ. ದೂರದ ಆರಂಬಳ್ಳಿ ಸರ್ಕಾರಿ ಕಾಡಿನಲ್ಲಿ ಮುಖ್ಯ ರಸ್ತೆಯಿಂದ ೧೧ ಕಿ. ಮಿ. ಒಳಗೆ ತೇಗದ ಮರಗಳ ಕೊಯ್ತದಲ್ಲಿ ನಿರತರಾಗಿದ್ದ ೩ ಜನರನ್ನು ಆ. ೧೫ರಂದು ಇಲ್ಲಿನ ವಲಯ ಅರಣ್ಯಾಧಿಕಾರಿ ಡಿ. ಎಸ್. ಧರ್ಮಪಾಲ್ ಮತ್ತು ಸಿಬ್ಬಂದಿ ಬಂಧಿಸಿ, ೨೦ ಸಾವಿರ ರೂ. ಬೆಲೆಯ ನಾಟಾ ವಶಪಡಿಸಿಕೊಂಡು ಆರೋಪಿಗಳನ್ನು ಇಲ್ಲಿನ ನ್ಯಾಯಾಲಯದಲ್ಲಿ ಹಾಜರುಪಡಿಸಿದರು. ತನಿಖೆ ನಡೆಯುತ್ತಿದೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ; ಶೃಂಗೇರಿ ಪ್ರತಿನಿಧಿ: ಕಲ್ಕುಳಿ ವಿಠಲ ಹೆಗ್ಡೆ